RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಅಕ್ಟೋಬರ್ ೩, ೨೦೧೩ (ಆಶ್ವಯುಜ ೧೧ ಶಕ ವರ್ಷ ೧೯೩೫)<br>Bangalore, Thursday, Actober 3, 2013 ( Aashwayuja 11 , Shaka Varsha 1935) | ಸಂಚಿಕೆ ೪೦<br>Issue 40 |
|---|---|---|



## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ ಕೊಡಗು ಜಿಲ್ಲೆ, ಮಡಿಕೇರಿ-571201**

**ಸಂ:ಸಿಬ್ಬಂದಿ(1)ಸಿಆರ್/7/2010-11, ದಿನಾಂಕ:06-07-2013**

**ಅಧಿಕೃತ ಜ್ಞಾಪನ**

**ವಿಷಯ:** ಕೊಡಗು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ವಿಚಾರ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ/299/ಬಿಎಸ್‌ಸಿ:2006 ದಿ:03-02-2009.
2. ಸರ್ಕಾರದ ಅಧಿಸೂಚನೆ ಸಂ:ಕಂಇ/299/ಬಿಎಸ್‌ಸಿ/2006 ದಿ:24-07-2009
3. ಸರ್ಕಾರದ ಪತ್ರ ಸಂ:ಆರ್‌ಡಿ/4/ಬಿಎಸ್‌ಸಿ/2011 ದಿ:25-02-2011
4. ಸರ್ಕಾರದ ಪತ್ರ ಸಂ:ಕಂಇ/33/ಡಿಎಸ್‌ಪಿ/2012 ದಿ:05-06-2011
5. ಈ ಕಚೇರಿ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:02-08-2012
6. ಈ ಕಚೇರಿ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:17-09-2012
7. ಈ ಕಚೇರಿ ತಿಳುವಳಿಕೆ ಪತ್ರ ಸಮಸಂಖ್ಯೆ ದಿನಾಂಕ:05-10-2012

ಸರ್ಕಾರದ ಉಲ್ಲೇಖ (1) ರ ಅಧಿಸೂಚನೆಯನ್ವಯ ಕೊಡಗು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.

ಅದರಂತೆ, ಕರ್ನಾಟಕ ನಾಗರೀಕ ಸೇವೆ (Revenue Sub Ordinate Branch) (Cadre & Recruitment) (Amendment) ನಿಯಮಗಳು, 2009 ರಲ್ಲಿ ನಿಗಧಿಪಡಿಸಿರುವ ವಿದ್ಯಾರ್ಹತೆಯನ್ವಯ ಮೇಲ್ಕಂಡ ಖಾಲಿ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ (5) ರ ಅಧಿಸೂಚನೆಯ ಮೂಲಕ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತಾದಾಯಕ ವಿದ್ಯಾರ್ಹತೆಯಲ್ಲಿ ಗಳಿಸಿದ ಗರಿಷ್ಠ ಅಂಕಗಳ ಆಧಾರದಲ್ಲಿ ಸರ್ಕಾರ ನಿಗಧಿಪಡಿಸಿದ ಮೀಸಲಾತಿ ರೋಸ್ಟರ್ ನಿಯಮದ ಪ್ರಕಾರ 1:5 ರ ಅನುಪಾತದಲ್ಲಿ ಮೀಸಲಾತಿ ಹಾಗೂ ಸಮತಳ ಮೀಸಲಾತಿವಾರು ಕೊನೆಯ ಅಭ್ಯರ್ಥಿಯ ಶೇಕಡವಾರು ಅಂಕ ಮತ್ತು ಮೀಸಲಾತಿವಾರು ಅಭ್ಯರ್ಥಿಗಳ ದಿನಾಂಕ:17-09-2012 ರಂದು ಪ್ರಕಟಿಸಲಾಯಿತು ಹಾಗೂ ಈ ಪಟ್ಟಿಯ ಬಗ್ಗೆ ಆಕ್ಷೇಪಣೆ / ತಕರಾರು ಅರ್ಜಿಗಳನ್ನು ಸಲ್ಲಿಸಲು ದಿನಾಂಕ:25-09-2012 ರವರೆಗೆ ಕಾಲಾವಕಾಶವನ್ನು ನೀಡಲಾಯಿತು. ಸದರಿ ಅವಧಿಯಲ್ಲಿ ಯಾವುದೇ ಲಿಖಿತ ಆಕ್ಷೇಪಣೆಗಳು ಸ್ವೀಕೃತವಾಗದ ಕಾರಣ 1:5 ರ ಅನುಪಾತದಲ್ಲಿ ಪ್ರಕಟಿಸಿದ ಪಟ್ಟಿಯಂತೆ ದಿ:20-10-2012 ರಂದು ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಯನ್ನು ನಡೆಸಲಾಯಿತು. ಪರಿಶೀಲನಾ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳು ಖುದ್ದು ಹಾಜರು ಪಡಿಸಿದ ಮೂಲ ದಾಖಲಾತಿಗಳನ್ನು ಪರಿಶೀಲಿಸಿ ಅಂತಿಮ ಆಯ್ಕೆ ಪಟ್ಟಿ ಮತ್ತು ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ದಿನಾಂಕ: 28-11-2012 ರಂದು ಪ್ರಕಟಿಸಲಾಯಿತು.

ಮುಂದುವರೆದು ಅಂತಿಮ ಆಯ್ಕೆ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳ ಗುಣ ನಡತೆ, ವರ್ಗವಾರು ಮೀಸಲಾತಿ ಸಿಂಧುತ್ವವನ್ನು ಪರಿಶೀಲಿಸಿ ವರದಿಸಲು ಸಂಬಂಧಪಟ್ಟ ಅಧಿಕಾರಿಗಳಿಗೆ ಪತ್ರ ಬರೆದು ವರದಿ ಪಡೆಯಲಾಗಿದೆ.

ಆದ್ದರಿಂದ ಮೇಲ್ಕಂಡ ಅಂಶಗಳ ಅವಲೋಕಯಂತೆ ಪೊಲೀಸ್ ಪರಿಶೀಲನಾ ವರದಿ ಮತ್ತು ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಬಂದಿರುವ ಈ ಕೆಳಕಂಡ ಅಭ್ಯರ್ಥಿಯನ್ನು ಗ್ರಾಮ ಲೆಕ್ಕಾಧಿಕಾರಿಯ ಹುದ್ದೆಯ ರೂ.11600-200-12000-250-13000-300-14200-350-15600-400-17200-

450–19000–500–21000 ವೇತನ ಶ್ರೇಣಿಯಲ್ಲಿ, ಅವರ ಹೆಸರಿನ ಎದುರು ನಮೂದಿಸಲ್ಪಟ್ಟ ಕಾರ್ಯಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳಿಗನುಸಾರವಾಗಿ ನೇಮಕಾತಿಗೊಳಿಸಿ ಆದೇಶ ಹೊರಡಿಸಿದೆ.

| Sl. No. | Cand. Name | Address | Selected Under Group. | Appointed Place | Reporting Officer |
|---|---|---|---|---|---|
| 1 | HEMANTH KUMARA | S/o KRISHNA NAIK KURUBARAHALLI THANDYA KURUVANKA POST ARASIKERE TQ HASSAN 573103 | SC (Others) | Bittangala Circle | Tahsildar, Virajpet Taluk |

ಅಭ್ಯರ್ಥಿಯು ಗ್ರಾಮೀಣ ಜನರ ಸೇವೆಗೆ ಕಂಕಣಬದ್ಧರಾಗಿ, ನಿಷ್ಠೆ, ಪ್ರಾಮಾಣಿಕತೆ ಹಾಗೂ ನಿಸ್ಪೃಹತೆಯಿಂದ ಕರ್ತವ್ಯ ನಿರ್ವಹಿಸಲು ಸೂಚಿಸಿದೆ.

**ಷರತ್ತುಗಳು:**

1. ಮೇಲ್ಕಂಡ ಅಭ್ಯರ್ಥಿಯು ನೇಮಕಾತಿ ಆದೇಶ ಸ್ವೀಕರಿಸಿದ 15 ದಿನಗಳೊಳಗೆ ಸಂಬಂಧಿಸಿದ ತಹಶೀಲ್ದಾರ್‌ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಈ ನೇಮಕವನ್ನು ಒಂದು ವೇಳೆ ತಿರಸ್ಕರಿಸಿದಲ್ಲಿ, 07 ದಿವಸಗಳೊಳಗಾಗಿ ಲಿಖಿತ ರೂಪದಲ್ಲಿ ಜಿಲ್ಲಾಧಿಕಾರಿಗಳ ಕಚೇರಿಗೆ ತಿಳಿಸತಕ್ಕದ್ದು.
2. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗಾಗಿ ಹಾಜರುಪಡಿಸಬೇಕು. 1) ಪಿ.ಯು.ಸಿ. ಅಂಕಪಟ್ಟಿ 2) ಎಸ್‌ಎಸ್‌ಎಲ್‌ಸಿ / ಹುಟ್ಟಿದ ದಿನಾಂಕದ ದೃಢೀಕರಣ 3) ಶಾಲಾ ವರ್ಗಾವಣೆ ಪ್ರಮಾಣ ಪತ್ರ 4) ವೈದ್ಯಕೀಯ ಪ್ರಮಾಣ ಪತ್ರ 5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರಗಳು (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ)
3. ಅಭ್ಯರ್ಥಿಯು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ 3) ಕನ್ನಡ ಭಾಷಾ ಪರೀಕ್ಷೆ (ಎಸ್.ಎಸ್.ಎಲ್.ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲಾಗುವುದು.
4. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲಾಗುವುದು.
5. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಾತ್ಮಕವಾಗಿ ಗೊತ್ತುಪಡಿಸಿದ ನಮೂನೆಯಲ್ಲಿ ವಚನ ಸ್ವೀಕಾರ ಮಾಡತಕ್ಕದ್ದು.
6. ಅಭ್ಯರ್ಥಿಯು ಸರ್ಕಾರದ ಆದೇಶ ಸಂ:ಎಫ್‌ಡಿ (ಎಸ್‌ಪಿಎಲ್) 04/ಪಿಇಟಿ/2005 ದಿನಾಂಕ:31–03–2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.
7. ಸರ್ಕಾರದ ಸುತ್ತೋಲೆ ಸಂ:ಕಂಇ/54/ಬಿಎಸ್‌ಸಿ/2007 ದಿನಾಂಕ:27–03–2007 ರನ್ವಯ ಅಂತರ್ ಜಿಲ್ಲಾ ವರ್ಗಾವಣೆಗೆ ಕೊಡಗು ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.
8. ಅಭ್ಯರ್ಥಿಯು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ ಗುರುತಿನ ಚೀಟಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.
9. ಅಭ್ಯರ್ಥಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957 ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲ ಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
10. ಅಭ್ಯರ್ಥಿಯ ಜೇಷ್ಠತೆಯು ನೇರ ನೇಮಕಾತಿ ಪ್ರಾಧಿಕಾರದ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು. ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಅಧಿಸೂಚನೆ/ಕಾನೂನು ತಿದ್ದುಪಡಿಗೆ ಒಳಪಡುತ್ತದೆ.
11. ಗ್ರಾಮ ಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ, ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.
12. ಅಭ್ಯರ್ಥಿಯು ಇಲಾಖೆಯಿಂದ ಕಾಲ ಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ / ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.
14. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.
15. ಆಯ್ಕೆಯಾಗಿರುವ ಅಭ್ಯರ್ಥಿಯು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು. ಈ ಬಗ್ಗೆ ಒಂದು ಪ್ರಮಾಣ ಪತ್ರವನ್ನು (ನಮೂನೆಯಂತೆ) ನೋಟರಿಯವರಿಂದ ಪ್ರಮಾಣೀಕರಿಸಿ ಹಾಜರುಪಡಿಸಬೇಕು.

**ಡಾ:ಎನ್.ವಿ.ಪ್ರಸಾದ್**
ಅಧ್ಯಕ್ಷರು,
ಗ್ರಾಮಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ ಮತ್ತು
ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.

**PR.98**
**SC.5**

## ಲಘು ವ್ಯವಹಾರಗಳ ನ್ಯಾಯಾಲಯ, ಬೆಂಗಳೂರು

**ಸಂಖ್ಯೆ: ಆ.ವಿ.1/ನೇಮಕಾತಿ/314/2013, ದಿನಾಂಕ: 5.9.2013**

**ನೇಮಕಾತಿ ಪ್ರಕಟಣೆ**

ಬೆಂಗಳೂರು, ಲಘು ವ್ಯವಹಾರಗಳ ನ್ಯಾಯಾಲಯದ ಘಟಕದಲ್ಲಿ ಖಾಲಿ ಇರುವ 16 ಜವಾನರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಕೆಳಕಂಡ ಷರತ್ತುಗಳನ್ನು ಪೂರೈಸಿದ ಅರ್ಹ ಅಭ್ಯರ್ಥಿಗಳು **ದಿನಾಂಕ:11.10.2013 ರ ಸಂಜೆ 5.30** ಗಂಟೆಯೊಳಗೆ ಅರ್ಜಿಗಳನ್ನು ಸಲ್ಲಿಸಲು ಸೂಚಿಸಿದೆ.

**: ಖಾಲಿ ಹುದ್ದೆಯ ವಿವರಗಳು:**

| ಕ್ರಮ ಸಂಖ್ಯೆ | ಅಧಿಸೂಚನೆ ಸಂಖ್ಯೆ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಆವಿ:1 ನೇಮಕಾತಿ/314/2013 | 16 | ರೂ.9600–200–12000–250–13000–300–14200–350–14550 |

**: ಖಾಲಿ ಹುದ್ದೆಗಳ ವರ್ಗೀಕರಣ :**

ಸರ್ಕಾರಿ ಆದೇಶ ಸಂಖ್ಯೆ ಡಿಪಿಎಆರ್ 8 ಸಹಿಮ 95 ದಿನಾಂಕ: 20–06–95 ಮತ್ತು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 97 ಸೇನೆನಿ 2002 ದಿನಾಂಕ 22–11–2002 ಹಾಗೂ ಸರ್ಕಾರಿ ಆದೇಶ ಸಂಖ್ಯೆ 3 ಸಿಆಸುಇ 53 ಸೇನೆನಿ ದಿನಾಂಕ: 4.1.2008 ರ ಪ್ರಕಾರ ಕಾದಿರಿಸಿದ ಹುದ್ದೆಗಳ ವರ್ಗೀಕರಣ:

**ಜವಾನರ ಹುದ್ದೆಗಳು : (ಒಟ್ಟು 16 ಹುದ್ದೆಗಳು)**

ಪ್ರಾರಂಭಿಕ ರೋಸ್ಟರ್ ಬಿಂದು : 39 ಅಂತಿಮ ರೋಸ್ಟರ್ ಬಿಂದು : 54

| ಮೀಸಲಾತಿ | ಇತರೆ | ಮಹಿಳಾ | ಗ್ರಾಮೀಣ | ಮಾಜಿ ಸೈನಿಕ | ಅಂಗವಿಕಲ | ಒಟ್ಟು |
|---|---|---|---|---|---|---|
| ಪರಿಶಿಷ್ಟ ಜಾತಿ | 01 | 01 | 01 | – | – | 03 |
| ಪರಿಶಿಷ್ಟ ಪಂಗಡ | – | 01 | – | – | – | 01 |
| ಪ್ರವರ್ಗ–2ಎ | 01 | 01 | – | – | – | 02 |
| ಪ್ರವರ್ಗ –3ಎ | – | 01 | – | – | – | 01 |
| ಪ್ರವರ್ಗ–3ಬಿ | – | 01 | – | – | – | 01 |
| ಸಾಮಾನ್ಯ ಅಭ್ಯರ್ಥಿ | 02 | 02 | 02 | 01 | 01 | 08 |
| **ಒಟ್ಟು** | **04** | **07** | **03** | **01** | **01** | **16** |

| | | |
|---|---|---|
| 1 | ನೇಮಕಾತಿ ವಿಧಾನ | ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982, ನಿಯಮ 4ರ ಪ್ರಕಾರ ಸರ್ಕಾರದ ಅಧಿಸೂಚನೆ ಸಂಖ್ಯೆ ಲಾ 01 ಎಲ್‌ವಿಸಿ 2005 ದಿನಾಂಕ: 13.02.2008 ರಲ್ಲಿ ತಿದ್ದುಪಡಿಯಾದಂತೆ. |
| 2. | ಅರ್ಜಿಗಳನ್ನು ಕಳುಹಿಸಬೇಕಾದ ವಿಳಾಸ | ವಿಲೇಖನಾಧಿಕಾರಿಗಳು,<br>ಲಘು ವ್ಯವಹಾರಗಳ ನ್ಯಾಯಾಲಯ, ನಗರ ಸಿವಿಲ್ ನ್ಯಾಯಾಲಯ ಸಂಕೀರ್ಣ, ಬೆಂಗಳೂರು – 560009. |
| 3. | ಅಭ್ಯರ್ಥಿಗಳು ಅರ್ಜಿಗಳನ್ನು ಪಡೆಯಲು ಮತ್ತು ಸಲ್ಲಿಸಲು ಕೊನೆಯ ದಿನಾಂಕ | **ದಿನಾಂಕ: 11.10.2013ರಂದು ಸಂಜೆ 5.30** ಗಂಟೆಯೊಳಗೆ |
| 4. | ವಿದ್ಯಾರ್ಹತೆ: | ಅಭ್ಯರ್ಥಿಯು ಏಳನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು ಕನ್ನಡ ಓದಲು ಮತ್ತು ಬರೆಯಲು ಬರಬೇಕು. |

| | | |
|---|---|---|
| 5 | ವಯೋಮಿತಿ | ಅಭ್ಯರ್ಥಿಯು 18 ವರ್ಷ ಪೂರೈಸಿರಬೇಕು ಮತ್ತು ಗರಿಷ್ಠ ವಯಸ್ಸು ಕೆಳಕಂಡಂತಿದೆ.<br>1. ಪರಿಶಿಷ್ಟ ಜಾತಿ ಮತ್ತು ಪಂಗಡ ಹಾಗೂ ಪ್ರವರ್ಗ–1ರ ಅಭ್ಯರ್ಥಿಗಳಿಗೆ 40 ವರ್ಷ ಮೀರಿರಬಾರದು<br>2. ಪ್ರವರ್ಗ–2ಎ ಯಿಂದ 3ಬಿನ ಅಭ್ಯರ್ಥಿಗಳಿಗೆ 38 ವರ್ಷ ಮೀರಿರಬಾರದು<br>3. ಸಾಮಾನ್ಯ ಅಭ್ಯರ್ಥಿಗಳಿಗೆ 35 ವರ್ಷ ಮೀರಿರಬಾರದು<br>4. ವಯಸ್ಸಿನ ಮಿತಿಯನ್ನು ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ರಾಜ್ಯ/ ಕೇಂದ್ರ ಸರ್ಕಾರಿ ನೌಕರರು / ಮಾಜಿ ಸೈನಿಕರು / ಅಂಗವಿಕಲ ಅಭ್ಯರ್ಥಿಗಳು / ಹಾಗೂ ವಿಧವೆಯರ ಬಗ್ಗೆ ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಸಡಿಲಿಕೆಯನ್ನು ಕೊಡಲಾಗುವುದು |

**ಸೂಚನೆ:**

1. ಅರ್ಜಿ ನಮೂನೆಯನ್ನು ಲಘು ವ್ಯವಹಾರಗಳ ನ್ಯಾಯಾಲಯದ ಕಛೇರಿಯ ವೇಳೆಯಲ್ಲಿ ರೂ.10 ಶುಲ್ಕ ನೀಡಿ ಅರ್ಜಿಯನ್ನು ಪಡೆಯಬಹುದು. ಅಥವಾ ಅಂಚೆಯ ಮೂಲಕ 10 ರೂ.ಗಳ ಪೋಸ್ಟಲ್ ಆರ್ಡರ್ ಸಲ್ಲಿಸಿ ಸ್ವ–ವಿಳಾಸ ಇರುವ ಲಕೋಟೆಯನ್ನು ಸಲ್ಲಿಸಿ ಅರ್ಜಿಯನ್ನು ಪಡೆಯಬಹುದು.
2. ಅಭ್ಯರ್ಥಿಗಳು ಅರ್ಜಿಯೊಂದಿಗೆ ಭಾರತೀಯ ಪೋಸ್ಟಲ್ ಆರ್ಡರ್‌ಗಳನ್ನು ಮಾತ್ರ ವಿಲೇಖನಾಧಿಕಾರಿಗಳು, ಲಘು ವ್ಯವಹಾರಗಳ ನ್ಯಾಯಾಲಯ, ಬೆಂಗಳೂರು ಇವರ ಹೆಸರಿಗೆ ಪಡೆದು ಸಲ್ಲಿಸಬೇಕು. (ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳು 25/– ರೂಪಾಯಿಗಳ ಪೋಸ್ಟಲ್ ಆರ್ಡರನ್ನು) ಹಾಗೂ ಇತರೆ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳು 100/–ರೂಗಳ ಪೋಸ್ಟಲ್ ಆರ್ಡರ್‌ಗಳನ್ನು ಸಲ್ಲಿಸಬೇಕು. ಪೋಸ್ಟಲ್ ಆರ್ಡರ್ ಸಲ್ಲಿಸದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ. ಲಘು ವ್ಯವಹಾರಗಳ ನ್ಯಾಯಾಲಯದಿಂದ ಅರ್ಜಿ ನಮೂನೆ ಪಡೆಯದೆ ಬೇರೆ ನಮೂನೆ ಅಥವಾ ಬೆರಳಚ್ಚು ಮಾಡಿದ ನಮೂನೆಯನ್ನು ಸಲ್ಲಿಸಿದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು.
3. ಅಭ್ಯರ್ಥಿಯು ವಿದ್ಯಾಭ್ಯಾಸ ಮಾಡಿದ ಸಂಸ್ಥೆ ಹಾಗೂ ಸ್ಥಳೀಯ ಗಣ್ಯ ವ್ಯಕ್ತಿಯಿಂದ ಪಡೆದ ಎರಡು ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸಬೇಕು.
4. ನೇಮಕಾತಿಯು ತಾತ್ಕಾಲಿಕವಾಗಿದ್ದು 2 ವರ್ಷದ ಪರೀಕ್ಷಾರ್ಹ ಅವಧಿಯನ್ನು ಪೂರ್ಣಗೊಳಿಸಬೇಕಾಗಿರುತ್ತದೆ.
5. ಅಭ್ಯರ್ಥಿಯು ಈಗಾಗಲೇ ಸರ್ಕಾರಿ ನೌಕರಿಯಲ್ಲಿದ್ದರೆ ಅರ್ಜಿಗಳನ್ನು ನೇಮಕಾತಿ ಅಧಿಕಾರಿಗಳ ಮೂಲಕವೇ ಕಳುಹಿಸಬೇಕು.
6. ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಅಥವಾ ಇನ್ನಾವುದೇ ನಿಯಮಗಳ ಪ್ರಕಾರ ಅಭ್ಯರ್ಥಿಯು ಅನರ್ಹನಾಗಿದ್ದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ.
7. ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನ ಸಮಯದಲ್ಲಿ ಮಾತ್ರ ಹಾಜರುಪಡಿಸತಕ್ಕದ್ದು.

ಅಭ್ಯರ್ಥಿಗಳು ಅರ್ಜಿಯೊಂದಿಗೆ ಕೆಳಕಂಡ ದಾಖಲಾತಿಗಳ **ಸ್ವಯಂ ದೃಢೀಕೃತ ನಕಲನ್ನು** ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಯಾವ ಸೂಚನೆಯನ್ನು ನೀಡದೆ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

1. ಹುಟ್ಟಿದ ದಿನಾಂಕದ ಬಗ್ಗೆ ಜನನ ಪ್ರಮಾಣ ಪತ್ರ ಅಥವಾ ಶಾಲಾ ವರ್ಗಾವಣೆ ಪತ್ರ ಇತ್ಯಾದಿ
2. ವಿದ್ಯಾರ್ಹತೆ ಬಗ್ಗೆ ಅಂಕಪಟ್ಟಿಗಳ ದೃಢೀಕೃತ ನಕಲು
3. ಈಗಾಗಲೇ ಸೇವೆಯಲ್ಲಿರುವವರ ಬಗ್ಗೆ ಸೇವಾ ದೃಢೀಕರಣ ಪತ್ರ
4. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಿಗದಿತ ನಮೂನೆ 'ಡಿ' ಪ್ರಕಾರ ಪಡೆದ ಜಾತಿ ಪ್ರಮಾಣ ಪತ್ರ
5. ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಿಗದಿತ ನಮೂನೆ 'ಇ' ಪ್ರಕಾರ ಪಡೆದ ಜಾತಿ ಪ್ರಮಾಣ ಪತ್ರ
6. ಹಿಂದುಳಿದ ಪ್ರವರ್ಗಗಳಿಗೆ (2ಎ ಯಿಂದ 3ಬಿ) ಸೇರಿದ ಅಭ್ಯರ್ಥಿಗಳು ಸರ್ಕಾರಿ ಅಧಿಸೂಚನೆ ಸಂಖ್ಯೆ ಎಸ್.ಡಬ್ಲ್ಯೂ.ಡಿ. 126 ಬಿಸಿಎ 2002 ದಿಃ 13.02.2003 ರಲ್ಲಿ ನಿಗಧೀಕರಿಸಿದ್ದ ಫಾರಂ 'ಎಫ್' ಪ್ರಕಾರ ಸಂಬಂಧಿತ ತಹಸೀಲ್ದಾರ್‌ರವರು ನೀಡಿರುವ ಜಾತಿ ಮತ್ತು ಆಧಾಯ ದೃಢೀಕರಣ ಪತ್ರ
7. ಗ್ರಾಮೀಣ ಅಭ್ಯರ್ಥಿಗಳು ಆದೇಶ ಸಂಖ್ಯೆ ಸಿಆಸುಇ 06 ಸೇನೆನಿ 2001 ದಿಃ 13.02.2001 ರ ರೀತ್ಯಾ ನಮೂನೆ–1 ಮತ್ತು 2 ರಲ್ಲಿ ನಿಗಧಿತ ನಮೂನೆಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳವರಿಂದ ಮೇಲುರುಜು ಮಾಡಿಸಿದ ಪ್ರಮಾಣ ಪತ್ರ
8. ಅಭ್ಯರ್ಥಿಗಳು ಅರ್ಜಿಗಳೊಂದಿಗೆ ಲಗತ್ತಿಸಿರುವ ಅಡಕಗಳನ್ನು ಸ್ವಯಂ ದೃಢೀಕರಿಸಿ ಸಲ್ಲಿಸತಕ್ಕದ್ದು, ದೃಢೀಕರಣವಿಲ್ಲದೆ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು
9. ಭರ್ತಿ ಮಾಡಿದ ಅರ್ಜಿ, ಅಡಕಗಳೊಂದಿಗೆ ಅಭ್ಯರ್ಥಿಗಳು ಸ್ವ–ವಿಳಾಸ ಬರೆದು 5/–ರೂ.ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಲಕೋಟೆಯನ್ನು ಸಲ್ಲಿಸುವುದು

ಮುಖ್ಯ ನ್ಯಾಯಾಧೀಶರ ಆದೇಶದ ಮೇರೆಗೆ
ವಿಲೇಖನಾಧಿಕಾರಿಗಳು,
ಲಘು ವ್ಯವಹಾರಗಳ ನ್ಯಾಯಾಲಯ, ಬೆಂಗಳೂರು

PR.99
SC.5

## FORM-IV

(See Rule 12)

It is hereby notified that the undersigned has changed his name from **GURAPPA S/o MANU LAMANI to GURAPPA S/o MANU NAYAK.**

**P.D. C/n 115** **GURAPPA S/o MANU LAMANI.**
**SC-10**

## ನಮೂನೆ –1

**(9ನೇ ನಿಯಮ ನೋಡಿ)**

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂ: ಸಇ 327 ಎಸಸೇ 2012, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್ 2013**

ಸಹಕಾರ ಇಲಾಖೆಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ವಲಯ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ "**ಡಿ.ಪಾಂಡುರಂಗಪ್ಪ**" ಎಂಬ ಹೆಸರನ್ನು "**ಪಾಂಡುರಂಗ ಗರಗ್.ಡಿ**" ಎಂದು ಬದಲಾಯಿಸಿಕೊಳ್ಳಲು ಸರ್ಕಾರದ ಅನುಮತಿ ನೀಡಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ**
**ಎ.ಎಸ್.ವಿಶ್ವೇಶ್ವರಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.D. C/n 116**
**SC-10**

## ನಮೂನೆ –1

**(9ನೇ ನಿಯಮ ನೋಡಿ)**

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟ, ದಿನಾಂಕ: 05–07–2013**

**ಅಧಿಸೂಚನೆ**

ಶಿಕ್ಷಣ ಇಲಾಖೆಯ ಕಾರ್ಯಾಲಯ, ಸ.ಹಿ.ಪ್ರಾ.ಶಾಲೆ, ಕೋರಮ್ಮದೇವಿ ತೋಟ ಒಂಟಗೋಡಿ ತಾ: ಮುಧೋಳ ಜಿ:ಬಾಗಲಕೋಟ ಇಲ್ಲಿ ಸಹಾಯಕ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ **ಶ್ರೀ ರಂಗಪ್ಪ ಹನಮಪ್ಪ ಮಾದರ** ಇವರ ಹೆಸರನ್ನು **ರಂಗಪ್ಪ ಹನಮಪ್ಪ ಹಾದಿಮನಿ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

**P.D. C/n 117** **ಉಪ ನಿರ್ದೇಶಕರು (ಆಡಳಿತ)**
**SC-10** **ಸಾರ್ವಜನಿಕ ಶಿಕ್ಷಣ** ಇಲಾಖೆ, ಬಾಗಲಕೋಟ

## ನಮೂನೆ –1

**(9ನೇ ನಿಯಮ ನೋಡಿ)**

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟ, ದಿನಾಂಕ: 05–07–2013**

**ಅಧಿಸೂಚನೆ**

ಶಿಕ್ಷಣ ಇಲಾಖೆಯ ಕಾರ್ಯಾಲಯ, ಸ.ಹಿ.ಪ್ರಾ.ಶಾಲೆ, ಜನತಾಪ್ಲಾಟ್ ಲೋಕಾಪೂರ ತಾ: ಮುಧೋಳ ಜಿ:ಬಾಗಲಕೋಟ ಇಲ್ಲಿ ಸಹಾಯಕ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ **ಶ್ರೀ ಪ್ರಕಾಶ ಸಿದ್ದಲಿಂಗಪ್ಪ ಚಲವಾದಿ** ಇವರ ಹೆಸರನ್ನು **ಪ್ರಕಾಶ ಸಿದ್ದಲಿಂಗಪ್ಪ ನಾಗವಾಡ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

**P.D. C/n 118** ಉಪ ನಿರ್ದೇಶಕರು (ಆಡಳಿತ)
**SC-10** **ಸಾರ್ವಜನಿಕ ಶಿಕ್ಷಣ** ಇಲಾಖೆ, ಬಾಗಲಕೋಟ

**ನಮೂನೆ –1**

**(9ನೇ ನಿಯಮ ನೋಡಿ)**

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಜಮಖಂಡಿ, ದಿನಾಂಕ: 27–07–2013**

**ಅಧಿಸೂಚನೆ**

ಶಿಕ್ಷಣ ಇಲಾಖೆಯ ಕಾರ್ಯಾಲಯ, ಸರಕಾರಿ ಕಿರಿಯ ಪ್ರಾಥಮಿಕ ಶಾಲೆ, ಅಡಿಹುಡಿ ತೋಟ, ಅಡಿಹುಡಿ ತಾ: ಜಮಖಂಡಿ ಜಿ:ಬಾಗಲಕೋಟ ಇಲ್ಲಿ ಸಹಾಯಕ ಶಿಕ್ಷಕರಾಗಿ ಕೆಲಸ ಮಾಡುತ್ತಿರುವ **ಶ್ರೀ ಅಶೋಕ ಚಾಂಬರ** ಇವರ ಹೆಸರನ್ನು **ಅಶೋಕ ಸನ್ನೊಳ್ಳಿ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

**ಕ್ಷೇತ್ರ ಶಿಕ್ಷಣಾಧಿಕಾರಿಗಳು,**
ಜಮಖಂಡಿ ಜಿ:ಬಾಗಲಕೋಟ.

**P.D. C/n 119**
**SC-10**

**ನಮೂನೆ –1**

**(9ನೇ ನಿಯಮ ನೋಡಿ)**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಕಾಸಸೌಧ, ಬೆಂಗಳೂರು, ದಿನಾಂಕ: 4–09–2013**

**ಅಧಿಸೂಚನೆ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಕಾರ್ಯಾಲಯ, ಜಿಲ್ಲಾ ಆಸ್ಪತ್ರೆ, ಗುಲ್ಬರ್ಗ ಇಲ್ಲಿ ವೈದ್ಯಾಧಿಕಾರಿಯಾಗಿ ಕೆಲಸ ಮಾಡುತ್ತಿರುವ **ಡಾ:ಜಗದೀಶ್,** ಇವರ ಹೆಸರನ್ನು **ಡಾ|| ಜಗದೀಶ ಎಂ.ಕಟ್ಟಿಮನಿ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

**ಬಿ.ಎಸ್.ನಾಗರಾಜ್,**
**ಸರ್ಕಾರದ ಅಧೀನ ಕಾರ್ಯದರ್ಶಿ,**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ಬೆಂಗಳೂರು

**P.D. C/n 120**
**SC-10**

**FORM-IV**

(See Rule 12)

It is hereby notified that the undersigned has changed his name from **SHARANAPPA L. MADAR to SHARANAPPA L. AIHOLLI**

**SHARANAPPA L. MADAR**

**P.D. C/n 121**
**SC-10**

**ನಮೂನೆ –1**

**(9ನೇ ನಿಯಮ ನೋಡಿ)**

**ಸಾರ್ವಜನಿಕ ಶಿಕ್ಷಣ ಇಲಾಖೆ**

**ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟ, ದಿನಾಂಕ: 05–07–2013**

**ಅಧಿಸೂಚನೆ**

ಶಿಕ್ಷಣ ಇಲಾಖೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಲಕ್ಷ್ಮೀನಗರ, ನಂದಗಾಂವ, ಮುಧೋಳ ತಾಲ್ಲೂಕು, ಬಾಗಲಕೋಟ ಜಿಲ್ಲೆ, ಇಲ್ಲಿ ಸಹಾಯಕ ಶಿಕ್ಷಕ/ಶಿಕ್ಷಕಿಯಾಗಿ ಕಾರ್ಯನಿರ್ವಹಿಸುತ್ತಿರುವ **ಶ್ರೀ/ಶ್ರೀಮತಿ ಗುರುನಾಥ ಶಿವಲಿಂಗಪ್ಪ ಮಾದರ** ಅವಳ/ಅವನ ಹೆಸರನ್ನು **ಗುರುನಾಥ ಶಿವಲಿಂಗಪ್ಪ ಬೇವಿನಗಿಡದ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

**ಉಪ ನಿರ್ದೇಶಕರು (ಆಡಳಿತ)**
**ಸಾರ್ವಜನಿಕ ಶಿಕ್ಷಣ** ಇಲಾಖೆ, ಬಾಗಲಕೋಟ

**P.D. C/n 122**
**SC-10**

**ನಮೂನೆ –1**

**(9ನೇ ನಿಯಮ ನೋಡಿ)**

**ಆಯುಕ್ತರ ಕಛೇರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ**

**ವಸಂತನಗರ, ಬೆಂಗಳೂರು–560 052**

**ಅಧಿಸೂಚನೆ**

**ಸಂಖ್ಯೆ: ಹಿಂವಕನಿ:ಸಿಬ್ಬಂದಿ–3:ಸಿಆರ್–38:2011–12, ದಿನಾಂಕ: 10–09–2013**

ಶ್ರೀ **ಗುರುಪಾದಪ್ಪ ಸಿದ್ದಪ್ಪ ಭಾಸಗಿ,** ಇವರು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಕುಂದರಗಿ, ಬೀಳಗಿ ತಾ: ಬಾಗಲಕೋಟ ಜಿಲ್ಲೆ ಇಲ್ಲಿ ನಿಲಯ ಮೇಲ್ವಿಚಾರಕರಾಗಿ ಕಾರ್ಯನಿರ್ವಹಿಸುತ್ತಿದ್ದು, ಸದರಿಯವರ ಹೆಸರನ್ನು **"ಗುರುಪಾದಪ್ಪ ಸಿದ್ದಪ್ಪ ಬಿರಾದಾರ"** ಎಂಬುದಾಗಿ ಬದಲಾಯಿಸಿಕೊಳ್ಳಲು ಅನುಮತಿ ನೀಡಿದೆ.

**ಆರ್. ಶಾಂತರಾಜ್, ಭಾ.ಆ.ಸೇ.,**
**ಆಯುಕ್ತರು,**
**ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು**

**P.D. C/n 123**
**SC-10**

**FORM-IV**

(See Rule 12)

**NOTICE**

It is hereby notified that the undersigned has changed his name from **BASAPPA YAMANAPPA LAMANI** to **BASAPPA YAMANAPPA RATHOD.**

**BASAPPA YAMANAPPA LAMANI**

**P.D. C/n 124**
**SC-10**

**FORM-IV**

(See Rule 12)

**NOTICE**

It is hereby notified that the undersigned has changed his name from **HABAPPA KHANAPPA LAMANI** to **HABAPPA KHANAPPA RATHOD.**

**HABAPPA KHANAPPA LAMANI**

**P.D. C/n 125**
**SC-10**

**FORM-IV**

(See Rule 12)

**NOTICE**

It is hereby notified that the undersigned has changed his name from **POMU BHOJU LAMANI** to **POMU BHOJU PAWAR.**

**POMU BHOJU LAMANI**

**P.D. C/n 126**
**SC-10**

## FORM-IV

(See Rule 12)

**NOTICE**

It is hereby notified that the undersigned has changed his name from **BHIMAPPA YALGURADAPPA YANTAMAN** to **BHIMAPPA YALGURADAPPA PRABHAKAR.**

**P.D. C/n 127**
**SC-10**

**BHIMAPPA YALGURADAPPA YANTAMAN**

## FORM-IV

(See Rule 12)

**NOTICE**

It is hereby notified that the undersigned has changed his name from **BABU DESU LAMANI** to **BABU DESU PAWAR**.

**P.D. C/n 128**
**SC-10**

**BABU DESU LAMANI**